KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಡಿಸೆಂಬರ್ ೧೪, ೨೦೦೬ (ಮಾರ್ಗಶಿರ ೨೩, ಶಕ ವರ್ಷ ೧೯೨೮) | ಸಂಚಿಕೆ ೪೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯ ಗಳಿಗೆ ಅಪರ ಸರ್ಕಾರಿ ವಕೀಲರ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಲಾ 98 ಎಲ್‌ಸಿಇ :2003 ದಿನಾಂಕ:21.10.2003.
2. ಸರ್ಕಾರದ ಆದೇಶ ಸಂಖ್ಯೆ:ಲಾ 47 ಎಲ್‌ಸಿಇ:2004 ದಿನಾಂಕ:30.3.2005.
3. ಸರ್ಕಾರದ ಆದೇಶ ಸಂಖ್ಯೆ:ಲಾ 47 ಎಲ್‌ಸಿಇ :2004 ದಿನಾಂಕ:30.5.2006.
4. ಸರ್ಕಾರದ ಆದೇಶ ಸಂಖ್ಯೆ:ಲಾ 47 ಎಲ್‌ಸಿಇ :2004 ದಿನಾಂಕ:25.7.2006.
5. ಸರ್ಕಾರದ ಆದೇಶ ಸಂಖ್ಯೆ:ಲಾ 47 ಎಲ್‌ಸಿಇ :2004 (ಭಾಗ-1) ದಿನಾಂಕ:12.10.2006.

**ಪ್ರಸ್ತಾವನೆ:**

ಆನೇಕಲ್, ದೇವನಹಳ್ಳಿ, ನಾಗಮಂಗಲ, ಮಳವಳ್ಳಿ, ಕೃಷ್ಣರಾಜಪೇಟೆ, ಖಾನಾಪುರ, ಲಿಂಗಸಗೂರು,ಬಾದಾಮಿ, ಕೆ.ಆರ್. ನಗರ, ಗುಬ್ಬಿ, ಕೊಳ್ಳೇಗಾಲ, ಅರಕಲಗೂಡು, ಯಲ್ಲಾಪುರ, ರಾಯಬಾಗ್, ರಾಮದುರ್ಗ, ಚಿಂಚೋಳಿ, ಯಲಬುರ್ಗಾ, ಕುಮಟ, ಸಿಂಧಗಿ, ಸೊರಬ, ಮತ್ತು ರೋಣ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯಗಳನ್ನು ಸ್ಥಾಪಿಸಲು ಮೇಲೆ (1)(2)(3)(4) ಮತ್ತು (5) ರಲ್ಲಿ ಓದಲಾದ ಆದೇಶಗಳಲ್ಲಿ ಮಂಜೂರಾತಿ ನೀಡಲಾಗಿತ್ತು. ಈ ನ್ಯಾಯಾಲಯಗಳಿಗೆ ಅಪರ ಸರ್ಕಾರಿ ವಕೀಲರ ಹುದ್ದೆಗಳನ್ನು ಸೃಜಿಸುವುದರ ಅವಶ್ಯಕತೆ ಮನಗಂಡು ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಲಾ:51 ಎಲ್‌ಎಜಿ 2006, ಬೆಂಗಳೂರು, ದಿನಾಂಕ:16ನೇ ನವೆಂಬರ್ 2006**

ಈ ಕೆಳಗಿನ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ನ್ಯಾಯಾಲಯಗಳಿಗೆ ತಲಾ ಒಂದೊಂದು ಅಪರ ಸರ್ಕಾರಿ ವಕೀಲರ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ನ್ಯಾಯಾಲಯ ಇರುವ ಸ್ಥಳ | ಹುದ್ದೆ |
|---|---|---|
| 1 | ಆನೇಕಲ್, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 2 | ದೇವನಹಳ್ಳಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 3 | ನಾಗಮಂಗಲ, ಮಂಡ್ಯ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 4 | ಮಳವಳ್ಳಿ, ಮಂಡ್ಯ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 5 | ಕೃಷ್ಣರಾಜಪೇಟೆ, ಮಂಡ್ಯ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 6 | ಖಾನಾಪುರ, ಬೆಳಗಾವಿ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 7 | ರಾಯಬಾಗ್, ಬೆಳಗಾವಿ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 8 | ರಾಮದುರ್ಗ, ಬೆಳಗಾವಿ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 9 | ಲಿಂಗಸಗೂರು, ರಾಯಚೂರು ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 10 | ಬಾದಾಮಿ, ಬಾಗಲಕೋಟೆ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 11 | ಕೆ.ಆರ್. ನಗರ, ಮೈಸೂರು ಜಿಲ್ಲೆ | ಅಪರ ಸರ್ಕಾರಿ ವಕೀಲರು |

| ಕ್ರ.ಸಂ. | ನ್ಯಾಯಾಲಯ ಇರುವ ಸ್ಥಳ | ಹುದ್ದೆ |
|---|---|---|
| 12 | ಗುಬ್ಬಿ, ತುಮಕೂರು ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 13 | ಕೊಳ್ಳೇಗಾಲ, ಚಾಮರಾಜನಗರ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 14 | ಅರಕಲಗೂಡು, ಹಾಸನ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 15 | ಯಲ್ಲಾಪುರ, ಉತ್ತರ ಕನ್ನಡ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 16 | ಕುಮಟ, ಉತ್ತರ ಕನ್ನಡ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 17 | ಚಿಂಚೋಳಿ, ಗುಲ್ಬರ್ಗಾ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 18 | ಯಲಬುರ್ಗಾ, ಕೊಪ್ಪಳ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 19 | ಸಿಂಧಗಿ, ಬಿಜಾಪುರ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 20 | ಸೊರಬ, ಶಿವಮೊಗ್ಗ ಜಿಲ್ಲೆ | ಅಪರ ಸರ್ಕಾರಿ ವಕೀಲರು |
| 21 | ರೋಣ, ಗದಗ ಜಿಲ್ಲೆ | ಅಪರ ಸರ್ಕಾರಿ ವಕೀಲರು |

ಕರ್ನಾಟಕ ಕಾನೂನು ಅಧಿಕಾರಿಗಳು (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ 1977 ಷೆಡ್ಯೂಲ್ 6ರ ಪಟ್ಟಿಗೆ ಉಲ್ಲೇಖಿತ ಹುದ್ದೆಗಳನ್ನು ಅನುಕ್ರಮವಾಗಿ ಕ್ರಮವಾಗಿ ಕ್ರಮ ಸಂಖ್ಯೆ:48,49,50,51,52,53,54,55,56,57,58,59,60,61,62,63,64, 65,66,67, ಮತ್ತು 68 ಎಂಬುದಾಗಿ ಸೇರಿಸಿಕೊಳ್ಳತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಅವರ ಟಿಪ್ಪಣಿ ಸಂಖ್ಯೆ:ಆಇ 959 ವೆಚ್ಚ -7:2006 ದಿನಾಂಕ: 4.11.2006ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಇ. ಶಿವಾನಂದ**
ಸರ್ಕಾರದ ಅಧೀನ ಕಾರ್ಯದರ್ಶಿ,(ಆಡಳಿತ-1)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 1659

**ವಿಷಯ:** ಉತ್ತರ ಕನ್ನಡ ಜಿಲ್ಲೆ ಕಾರವಾರ ಕಂದಾಯ ತಾಲ್ಲೂಕಿನ ಮೂರು ಹೆಚ್ಚುವರಿ ನೋಟರಿ ಹುದ್ದೆಗೆ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 209 ಎಲ್‌ಸಿಎಲ್:2005 ದಿನಾಂಕ:24.12.2005.
2. ಸರ್ಕಾರಿ ಪತ್ರ ಸಂಖ್ಯೆ:ಲಾ 209 ಎಲ್‌ಸಿಎಲ್ :2005 ದಿನಾಂಕ:31.12.2005.
3. ಜಿಲ್ಲಾ ಸತ್ರ ನ್ಯಾಯಾಧೀಶರು,ಉತ್ತರ ಕನ್ನಡ ಇವರ ಪತ್ರ ಸಂಖ್ಯೆ:ADM.11/4530/2006 ದಿನಾಂಕ:18.9.06.

**ಪ್ರಸ್ತಾವನೆ:**

ದಿನಾಂಕ: 24.12.05ರ ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರಿ ಆದೇಶದಲ್ಲಿ, ಕಾರವಾರ ಕಂದಾಯ ತಾಲ್ಲೂಕಿಗೆ ಹೆಚ್ಚುವರಿಯಾಗಿ 3 ನೋಟರಿ ಹುದ್ದೆ ಸೃಜಿಸಲಾಗಿದೆ. ಸದರಿ ಹುದ್ದೆ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಸತ್ರ ನ್ಯಾಯಾಧೀಶರು, ಉತ್ತರ ಕನ್ನಡ ಜಿಲ್ಲೆ ಇವರನ್ನು ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ:31.12.05ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (3)ರ ದಿನಾಂಕ:18.9.06ರ ಪತ್ರದಲ್ಲಿ 13 ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಲಾ 116 ಎಲ್‌ಸಿಎಲ್ 2006, ಬೆಂಗಳೂರು, ದಿನಾಂಕ:18ನೇ ನವೆಂಬರ್ 2006**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಈ ಕೆಳಕಂಡವರುಗಳನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಕಾರವಾರ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

* ಶ್ರೀ. ರಾಜಶೇಖರ್ ಮಹಾರುದ್ರ ನಾಯಕ್,
  ವಕೀಲರು, ದುರ್ಗಾದೇವಿ ಟೆಂಪಲ್ ಹಿಂಭಾಗ,
  ಕೋಡಿಬಾಗ್, ಕಾರವಾರ ತಾಲ್ಲೂಕು.
* ಶ್ರೀ ಕೃಷ್ಣಾನಂದ ತುಕಾರಾಂ ಬೂತೆ,
  ವಕೀಲರು, ಹೌಸ್. ನಂ. 2888/ಸಿ-4,
  ಪದ್ಮನಾಭನಗರ, ಬಾಡ್, ಕಾರವಾರ.
* ಶ್ರೀಮತಿ ಬಿ. ಜಯಂತಿ,
  ವಕೀಲರು, ಕೇರಾಪ್ ಎಸ್.ಆರ್. ಕೌಶಿಕ್,
  ಕೆಂಚ ರೋಡ್, ಕಾಲರುದ್ರೇಶ್ವರ ಟೆಂಪಲ್ ಹತ್ತಿರ, ಕಾರವಾರ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0- ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳುಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗಧಿಪಡಿಸಲಾದ ರೂ. 1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢಿಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರುಗಳ ಹೆಸರನ್ನು ನೋಟರಿ ಅಧಿನಿಯಮ(1952)ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ-2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ. ( ಆಡಳಿತ-2)

ಪಿ.ಆರ್. 1660

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎ. ವಸುಧೇಂದ್ರಾಚಾರ್, ತಹಶೀಲ್ದಾರ್, ಶ್ರೀರಂಗಪಟ್ಟಣ ತಾಲ್ಲೂಕು ಇವರ ಹೃದಯದ ಚಿಕಿತ್ಸೆಗಾಗಿ ಅಂತಿಮ ಹಣವನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1. ಮಂಡ್ಯ ಜಿಲ್ಲಾಧಿಕಾರಿಗಳ ಪತ್ರ ಸಂ: ಎಸಿಟಿ (2) 53/05-06.ದಿನಾಂಕ:25.7.2005, 2.8.2005 ಮತ್ತು 14.6.2006.
2. ಸರ್ಕಾರಿ ಆದೇಶ ಸಂಖ್ಯೆ:ಕಂ ಇ 171 ಎಎಸ್‌ಡಿ 2005 ದಿನಾಂಕ:10.8.2005. ಮತ್ತು ದಿ:7.10.2005.
3. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಪತ್ರ ಸಂ:ಎಂಡಿಎ/ಎನ್ .ಡಿ/515/06-07, ದಿನಾಂಕ:7.9.2006.

**ಪ್ರಸ್ತಾವನೆ:**

ಶ್ರೀರಂಗಪಟ್ಟಣ ತಾಲ್ಲೂಕು ತಹಶೀಲ್ದಾರರಾದ ಶ್ರೀ ಎ. ವಸುಧೇಂದ್ರಾಚಾರ್ ರವರಿಗೆ ದಿನಾಂಕ:23.7.2005 ರಂದು ಹೃದಯಘಾತವಾಗಿ ಮೈಸೂರಿನ ವಿಕ್ರಂ ಆಸ್ಪತ್ರೆಯಲ್ಲಿ ತುರ್ತು ಚಿಕಿತ್ಸಾ ವಿಭಾಗಕ್ಕೆ ದಾಖಲಿಸಿದ್ದು, ಅವರಿಗೆ ಮುಂಗಡವಾಗಿ ರೂ. 9600/- (ಒಂಬತ್ತು ಸಾವಿರದ ಆರೂನೂರು ರೂಪಾಯಿಗಳು ಮಾತ್ರ)ಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮಂಜೂರು ಮಾಡಲಾಗಿತ್ತು.

ತದನಂತರ ಸದರಿ ತಹಶೀಲ್ದಾರರಿಗೆ PTCA (Angioplasty) ರ ಚಿಕಿತ್ಸೆಯ ವೆಚ್ಚ ಮುಂಗಡವಾಗಿ ರೂ. 56,000/-(ಐವಾತ್ತಾರು ಸಾವಿರ ರೂಪಾಯಿಗಳು)ಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮಂಜೂರು ಮಾಡಲಾಗಿತ್ತು.

ಜಿಲ್ಲಾಧಿಕಾರಿಗಳು ಮಂಡ್ಯ ಜಿಲ್ಲೆ ಇವರು ದಿನಾಂಕ:14.6.2006ರ ಪತ್ರದಲ್ಲಿ ಸದರಿ ಅಧಿಕಾರಿಯು ಜುಲೈ 2005ರಿಂದ ಫೆಬ್ರವರಿ 2006ರ ವರೆಗೆ ಚಿಕಿತ್ಸೆ ಪಡೆದಿರುವ ಬಾಬ್ತು ರೂ. 3,25,930/-ಗಳು ವೆಚ್ಚವಾಗಿರುವುದಾಗಿ ಸದರಿ ಮೊಬಲಗಿಗೆ ಅವಶ್ಯಕ ದೃಢಿಕರಣ ಪತ್ರ ಹಾಗೂ ಓಚರ್ ಗಳನ್ನು ಸಲ್ಲಿಸಿ ಅವರಿಗೆ ವೈದ್ಯಕೀಯ ವೆಚ್ಚದ ಬಾಬ್ತು ಮುಂಗಡ ಮಂಜೂರು ಮಾಡಿರುವ ರೂ. 65.600/-ಗಳನ್ನು ಸರಿಹೊಂದಿಸಿಕೊಂಡು ಬಾಕಿ ಮೊಬಲಗನ್ನು ಕಾನೂನು ರೀತ್ಯಾ ಮಂಜೂರು ಮಾಡಲು ಕೋರಿರುತ್ತಾರೆ.

ಸದರಿ ಜಿಲ್ಲಾಧಿಕಾರಿಗಳ ಕೋರಿಕೆಯನ್ವಯ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರಿಂದ ಅಭಿಪ್ರಾಯ/ಸಹಮತಿಯನ್ನು ಪಡೆಯಲಾಗಿ ನಿರ್ದೇಶಕರು ಮೇಲೆ ಓದಲಾದ ಉಲ್ಲೇಕ (3)ರ ಅಭಿಪ್ರಾಯದಲ್ಲಿ ರೂ. 3,25,930/- ವೆಚ್ಚ ಮಾಡಿದ ಮೊತ್ತದಲ್ಲಿ ರೂ. 86,821/- ಮರುಪಾವತಿಗೆ ಅರ್ಹವಿದ್ದು ಈಗಾಗಲೇ ಶ್ರೀಯುತರಿಗೆ ನೀಡಿರುವ ಮುಂಗಡ ರೂ. 65,600/-ಹೊರತುಪಡಿಸಿ ಬಾಕಿ ಉಳಿದ ರೂ. 21,221-00 ಹಾಗೂ ಉಳಿದ ಬಿಲ್ಲುಗಳ ಬಗ್ಗೆ ಒಟ್ಟು ರೂ. 14,905-00 ಮರುಪಾವತಿಗೆ ಅರ್ಹವೆಂದು ತಿಳಿಸಿರುವ ವರದಿ ಮೇರೆಗೆ ಉಳಿದ ಮೊತ್ತ ರೂ. 21,221.00+ ರೂ. 14,905-00 ಮಂಜೂರು ಮಾಡಲು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಕರ್ನಾಟಕ ಸರ್ಕಾರಿ ಆದೇಶ ಸಂಖ್ಯೆ :ಕಂ.ಇ 171 ಎಎಸ್‌ಡಿ 2005, ದಿನಾಂಕ:**

ಶ್ರೀ ವಸುಧೇಂದ್ರಾಚಾರ್, ತಹಶೀಲ್ದಾರ್, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ ಇವರಿಗೆ Coronary Ballan Angioplasty ಚಿಕಿತ್ಸೆಯ ವೆಚ್ಚಕ್ಕಾಗಿ ಅಂತಿಮ ಮೊಬಲಗು ರೂ. 14,905 (ರೂ. 168+134+ 190+ 205+ 4649+ 8943+ 616) + ರೂ 21,221.00= ಒಟ್ಟು ರೂ. 36,126. 00 (ಮೂವತ್ತಾರು ಸಾವಿರದ ನೂರ ಇಪ್ಪತ್ತಾರು ರೂಗಳು ಮಾತ್ರ) ಗಳನ್ನು ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆದೇಶ ಸಂ:FD 2(1) TFP 01 ದಿನಾಂಕ:17.4.2001ರಲ್ಲಿ ಆರ್ಥಿಕ ಇಲಾಖೆಯು ತನ್ನ ಅನುಮತಿಯನ್ನು ನೀಡಲಾಗಿದೆ ಎಂದು ಭಾವಿಸಬಹುದಾದ ಪ್ರಕರಣಗಳನ್ನು ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.(ಸೇವೆಗಳು-3)

ಪಿ.ಆರ್. 1662

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಕೆ. ದೇವೇಗೌಡ, ಕಿರಿಯ ಇಂಜಿನೀಯರ್, ಲೋಕೋಪಯೋಗಿ ಇಲಾಖೆ ಇವರನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಸೇವೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ, ಸಿಬ್ಬಂದಿ (2) :ಸಿಆರ್:60:2005-06, ದಿ:17.5.05.
2. ಶ್ರೀ. ಕೆ. ದೇವೆಗೌಡ, ಕಿರಿಯ ಇಂಜಿನಿಯರ್, ಇವರ ಮನವಿ ದಿನಾಂಕ:17.11.06.

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ ಇವರು ಪ್ರಸ್ತಾವನೆ ಸಲ್ಲಿಸಿ, ಪ್ರಾಧಿಕಾರದ ಆಕೃತಿ ರಚನಾ ಶಾಖೆಯು ತಾಂತ್ರಿಕ ವಿಷಯಗಳಿಗೆ ಸಂಬಂಧಿಸಿದಂತೆ ಹಾಗೂ ಕ್ರಿಯಾ ಯೋಜನೆಯಲ್ಲಿನ ಎಲ್ಲಾ ಕಾಮಗಾರಿಗಳ ಎಲ್ಲಾ ನಿರ್ವಹಣೆಯ ಜವಾಬ್ದಾರಿಯನ್ನು ಹೊಂದಿರುವುದರಿಂದ ಸದರಿ ವಿಭಾಗಕ್ಕೆ ವಿದ್ಯಾರ್ಹತೆ ಹೊಂದಿರುವ ಅಭಿಯಂತರರುಗಳ ಅವಶ್ಯಕತೆ ಇರುವುದರಿಂದ ಹೆಚ್ಚುವರಿಯಾಗಿ ಒಬ್ಬರು ಸಹಾಯಕ ಇಂಜಿನೀಯರ್ ಹಾಗೂ ಇಬ್ಬರು ಕಿರಿಯ ಇಂಜಿನೀಯರ್‌ಗಳನ್ನು ತಾತ್ಕಾಲಿಕವಾಗಿ ನಿಯೋಜನೆ ಮೇಲೆ ಭರ್ತಿ ಮಾಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆಗಾಗಿ ಮಂಡಿಸಿದಾಗ ಮಾನ್ಯ ಮುಖ್ಯಮಂತ್ರಿಯವರು (ನಗರಾಭಿವೃದ್ಧಿ ಸಚಿವರು) ಪ್ರಸ್ತುತ ಎರವಲು ಸೇವೆಯ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ. ಕೆ.ದೇವೇಗೌಡ, ಕಿರಿಯ ಅಭಿಯಂತರರು ಇವರನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಖಾಲಿ ಇರುವ ಹುದ್ದೆಯಲ್ಲಿ ಕಾರ್ಯಕಾರಿ ಆದೇಶದ ಮೂಲಕ ವಿಲೀನಗೊಳಿಸಲು ಅನುಮೋದಿಸಿರುತ್ತಾರೆ.

ಈ ಸಂಬಂಧ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು)ಯ ಅಭಿಪ್ರಾಯ ಕೋರಲಾಗಿ, ಸದರಿ ಇಲಾಖೆಯು ಈ ಕೆಳಕಂಡಂತೆ ಅಭಿಪ್ರಾಯ ನೀಡಿರುತ್ತದೆ:

"ಮೂಡಾದ ನೇಮಕಾತಿ ನಿಯಮಗಳಲ್ಲಿ ನಿಯೋಜನೆ ಮೇಲಿರುವ ಸರ್ಕಾರಿ ನೌಕರರನ್ನು ಮೂಡಾ ಸೇವೆಯಲ್ಲಿ ಸರ್ಕಾರದ ಅನುಮೋದನೆ ಪಡೆದು ವಿಲೀನಗೊಳಿಸಲು ಅವಕಾಶವಿದೆ. ಈ ನಿಯಮಗಳನ್ನು ನಗರಾಭಿವೃದ್ಧಿ ಇಲಾಖೆಯೇ ರೂಪಿಸಿರುವುದರಿಂದ, ಇದರ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಸ್ಪಷ್ಟೀಕರಣ/ವ್ಯಾಖ್ಯಾನವನ್ನು ನೀಡುವ ಅಗತ್ಯವಿರುವುದಿಲ್ಲ."

ಶ್ರೀ ಕೆ. ದೇವೇಗೌಡ, ಕಿರಿಯ ಇಂಜಿನೀಯರ್ ಇವರ ಸೇವೆಯನ್ನು ಪ್ರಾಧಿಕಾರದಲ್ಲಿ ವಿಲೀನಗೊಳಿಸುವ ಸಂಬಂಧ ಆರ್ಥಿಕ ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿ, ಆರ್ಥಿಕ ಇಲಾಖೆಯು ಈ ಕೆಳಕಂಡಂತೆ ಅಭಿಪ್ರಾಯ ನೀಡಿರುತ್ತದೆ:

"ಆದೇಶ ಸಂಖ್ಯೆ, ಎಫ್‌ಡಿ 70 ಎಸ್‌ಆರ್‌ಎಸ್ 77, ದಿನಾಂಕ:27.10.77 ರ ಆದೇಶದಲ್ಲಿನ ಎಲ್ಲಾ ಷರತ್ತುಗಳನ್ನು ಸದರಿ ಇಂಜಿನೀಯರ್ ಪೂರೈಸಿದ್ದಾರೆಯೇ?ಮೂಡಾದಲ್ಲಿ ವಿಲೀನಗೊಳ್ಳಲು ಇಚ್ಛಾ ಪತ್ರವನ್ನು ಬರೆದು ಕೊಟ್ಟಿದ್ದಾರೆಯೇ? ಇಲ್ಲದಿದ್ದಲ್ಲಿ ದಿನಾಂಕ:27.10.77 ರಲ್ಲಿನ ಸೇವಾ ಷರತ್ತುಗಳಿಗೆ ಒಪ್ಪಿದ್ದು, ಪುನಃ ಸರ್ಕಾರಿ ಸೇವೆಗೆ ಹಿಂದಿರುಗುವುದಿಲ್ಲವೆಂದು ಸ್ಪಷ್ಟವಾಗಿ ಒಪ್ಪಿದ ಪತ್ರವನ್ನು ಅವರಿಂದ ಪಡೆದು. ನಂತರ ಆರ್ಥಿಕ ಇಲಾಖೆಯನ್ನು ಸಂಪರ್ಕಿಸುವಂತೆ ಅಭಿಪ್ರಾಯ ಪಟ್ಟಿರುತ್ತಾರೆ."

ಈ ಹಿನ್ನೆಲೆಯಲ್ಲಿ ಶ್ರೀ ಕೆ. ದೇವೆಗೌಡ, ಕಿರಿಯ ಇಂಜಿನೀಯರ್ ರವರಿಂದ ದಿನಾಂಕ:17.11.06ರಂದು ಸರ್ಕಾರಿ ಪತ್ರದ ಮೂಲಕ ಒಪ್ಪಿಗೆ ಪತ್ರವನ್ನು ಕೋರಿರುತ್ತದೆ.

ಮೇಲೆ(2)ರಲ್ಲಿ ಓದಲಾದ ಮನವಿಯಲ್ಲಿ ಶ್ರೀ ಕೆ. ದೇವೇಗೌಡ, ಕಿರಿಯ ಇಂಜಿನೀಯರ್ ಇವರು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಹಾಲಿ ಖಾಲಿ ಇರುವ ಕಿರಿಯ ಇಂಜಿನೀಯರ್ ಹುದ್ದೆಯಲ್ಲಿ ತನ್ನ ಸೇವೆಯನ್ನು ವಿಲೀನಗೊಳಿಸಬೇಕೆಂದು ಕೋರಿದ್ದು, ಈ ಸಂಬಂಧ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 70 ಎಸ್‌ಆರ್‌ಎಸ್ 77, ದಿನಾಂಕ:27.10.77ರ ಆದೇಶದಲ್ಲಿ ತಿಳಿಸಿರುವ ಎಲ್ಲಾ ಷರತ್ತುಗಳಿಗೂ ಬದ್ದನಾಗಿರುತ್ತೇನೆಂದು, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ವಿಲೀನಗೊಳ್ಳಲು ಇದೇ ತನ್ನ ಇಚ್ಛಾ ಪತ್ರವೆಂದು ಹಾಗೂ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಕಿರಿಯ ಇಂಜಿನೀಯರ್ ಹುದ್ದೆಯಲ್ಲಿ ತನ್ನ ಸೇವೆಯಲ್ಲಿ ವಿಲೀನಗೊಳಿಸಿದ ನಂತರ ಮತ್ತೆ ಸರ್ಕಾರಿ ಸೇವೆಗೆ ಹಿಂದಿರುವುದಿಲ್ಲವೆಂದು ಘೋಷಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಲೋಕೋಪಯೋಗಿ ಇಲಾಖೆಯಿಂದ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಶ್ರೀ. ಕೆ. ದೇವೇಗೌಡ, ಕಿರಿಯ ಇಂಜಿನೀಯರ್, ಇವರ ಸೇವೆಯನ್ನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಖಾಯಂ ಆಗಿ ವಿಲೀನಗೊಳಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 297 ಮೈಅಪ್ರಾ 2005, ಬೆಂಗಳೂರು, ದಿನಾಂಕ:20ನೇ ನವೆಂಬರ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಕೆ. ದೇವೆಗೌಡ, ಕಿರಿಯ ಇಂಜಿನೀಯರ್, ಲೋಕೋಪಯೋಗಿ ಇಲಾಖೆ ಇವರನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ, ಎಫ್‌ಡಿ 70 ಎಸ್‌ಆರ್‌ಎಸ್ 77, ದಿನಾಂಕ:27.10.77ರ ಆದೇಶದಲ್ಲಿ ಷರತ್ತುಗಳಿಗೊಳಪಟ್ಟು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಿರಿಯ ಇಂಜಿನೀಯರ್ ಹುದ್ದೆಯಲ್ಲಿ ಅವರ ಸ್ವಂತ ಕೋರಿಕೆಯ ಮೇರೆಗೆ ಶಾಶ್ವತವಾಗಿ ವಿಲೀನಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1663

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2006-07ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಎಸ್.ಕೆ.ಎಂ ಎಜುಕೇಷನಲ್ ಟ್ರಸ್ಟ್ ಎಸ್.ಕೆ.ಎಂ. ಟೀಚರ್ಸ್ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ

**ಓದಲಾಗಿದೆ:**

1. ದಿನಾಂಕ:20.2.2004 ರ ಸಂಖ್ಯೆ:ಇಡಿ 261 ಯುಆರ್‌ಸಿ 2004 ರ ಸರ್ಕಾರಿ ಆದೇಶ.
2. ದಿನಾಂಕ:3.2.2006, ಸಂಖ್ಯೆ: F.SRO/NCTE/B.Ed/2005-06/5340ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ:30.9.2006ರ ಪ್ರಾಂಶುಪಾಲರು, ಎಸ್.ಕೆ.ಎಂ. ಕಾಲೇಜು, ಬೆಂಗಳೂರು ಇವರ ಪತ್ರ.

**ಪೀಠಿಕೆ:**

1. ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2. ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಎಸ್.ಕೆ.ಎಂ. ಎಜುಕೇಷನಲ್ ಟ್ರಸ್ಟ್‌ನ ಎಸ್.ಕೆ.ಎಂ. ಟೀಚರ್ಸ್ ಕಾಲೇಜಿಗೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ:3.2.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು. ಉಲ್ಲೇಖ (3)ರಲ್ಲಿರುವ ದಿನಾಂಕ:30.9.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಪ್ರಾಂಶುಪಾಲರು, ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 376 ಯುಬಿವಿ 2006, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2006**

3. ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000 ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999 ರ 2(1) ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಎಸ್.ಕೆ.ಎಂ ಎಜುಕೇಷನಲ್ ಟ್ರಸ್ಟ್ ಎಸ್.ಕೆ.ಎಂ. ಟೀಚರ್ಸ್ ಕಾಲೇಜಿನ ಬಿ.ಎಡ್. ಕೋರ್ಸಿಗೆ 2006-07ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದ ಕುಮಾರ್**

ಪಿ.ಆರ್. 1664

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2006-07ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರದ ಕ್ರೆಸೆಂಟ್ ಎಜುಕೇಷನಲ್ ಟ್ರಸ್ಟ್ ಕ್ರೆಸೆಂಟ್ ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಓದಲಾಗಿದೆ:**
1. ದಿನಾಂಕ:27.12.2003 ರ ಸಂಖ್ಯೆ:ಇಡಿ 394 ಯುಆರ್‌ಸಿ 2003 ರ ಸರ್ಕಾರಿ ಆದೇಶ.
2. ದಿನಾಂಕ:22.2.2006, ಸಂಖ್ಯೆ: F.SRO/NCTE/B.Ed/2005-06/5539ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ:28.9.2006ರ ಅಧ್ಯಕ್ಷರು, ಕ್ರೆಸೆಂಟ್ ಬಿ.ಎಡ್ ಕಾಲೇಜು, ಕೆ.ಕೆ. ದೊಡ್ಡಿ, ರಾಮನಗರಂ ಇವರ ಪತ್ರ.

**ಪ್ರಸ್ತಾವನೆ**

1. ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2. ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರದ ಕ್ರೆಸೆಂಟ್ ಎಜುಕೇಷನಲ್ ಟ್ರಸ್ಟ್ ನ ಕ್ರೆಸೆಂಟ್ ಕಾಲೇಜ್ ಆಫ್ ಎಜುಕೇಷನ್, ಕೆ.ಕೆ. ದೊಡ್ಡಿ, ರಾಮನಗರಂ , ಈ ಕಾಲೇಜಿಗೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ:22.2.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು. ಉಲ್ಲೇಖ (3)ರಲ್ಲಿರುವ ದಿನಾಂಕ:22.9.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು, ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 378 ಯುಬಿವಿ 2006, ಬೆಂಗಳೂರು, ದಿನಾಂಕ: 14ನೇ ನವೆಂಬರ್ 2006**

3. ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000 ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999 ರ 2(1) ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರದ ಕ್ರೆಸೆಂಟ್ ಎಜುಕೇಷನಲ್ ಟ್ರಸ್ಟ್ ನ ಕ್ರೆಸೆಂಟ್ ಕಾಲೇಜ್ ಆಫ್ ಎಜುಕೇಷನ್, ಕೆ.ಕೆ. ದೊಡ್ಡಿ, ರಾಮನಗರಂ ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2006-07ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ. ನಂದ ಕುಮಾರ್**

ಪಿ.ಆರ್. 1665

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

## URBAN DEVELOPMENT SECRETARIAT

**Sub:** Constitution of Bruhat Bangalore Mahanagara Palike- Committee to oversee the merger in terms of the Karnataka Municipal Corporation Act, 1976.

**Read:** Notification No. UDD 92 MNY 2006, dated:2.11.2006.

**Preamble:-**

With the decision to constitute Bruhat Bangalore Mahanagara Palike (Greater Bangalore Municipal Body) vide Notification dated:2.11.2006 read above, it has become necessary to constitute a Committee to overseed the merger in terms of Karnataka Municipal Corporations Act, 1976 as also the Delimitation process. Hence this order.

**Government Order No. UDD 86 MLR 06, Bangalore, Dated:20th November 2006**

Government are pleased to constitute the following Committee to oversee the merger of 07 CMCs, 01 TMC and 111 villages into Bangalore Mahanagara Palike in terms of Karnataka Municipal Corporations Act, 1976, provisions as also the delimittaion process.

1. Prinicipal Secretary to Hon'ble Chief Minister — Chairman
2. Principal Secretary to Government Urban Development — Member
3. Secretary to Government (M & UDAs) Urban Development Department. — Member
4. Secretary to Government Law Department — Member
5. Secretary to Hon'ble Chief Minister — Member Convener
6. Director Directorate of Municipal Administration, Bangalore — Member
7. Additional Secretary to Government Urban Development Department. — Member
8. Deputy Commissioner, Bangalore Urban District — Member

By Order and in the name of the Governor of Karnataka,

**B.G. WALI**

P.R. 1666

Under Secretary to Government,
Urban Development Department.

**ಜಲಸಂಪನ್ಮೂಲ ಸಚಿವಾಲಯ**

**ವಿಷಯ:** ಒಂದು ಶೀಘ್ರಲಿಪಿಗಾರರ ಹುದ್ದೆಯನ್ನು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರದಿಂದ ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಕೇಂದ್ರ ಕಚೇರಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:** 1. ಪ್ರಧಾನ ಇಂಜಿನೀಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ :ಜಸಅ/ ಇಎಸ್‌ಜೆ/ ಶೀ.ಗಾರ/ಶೀ.ಹು.ಸ್ಥ/2006-07. ದಿನಾಂಕ:3.10.2006.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 17 ಸೇಇಸಿ 2006, ಬೆಂಗಳೂರು, ದಿನಾಂಕ:20ನೇ ನವೆಂಬರ್ 2006**

ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಕೇಂದ್ರ ಕಚೇರಿಯಲ್ಲಿರುವ ಮೂರು ಶೀಘ್ರಲಿಪಿಗಾರರ ಹುದ್ದೆಗಳ ಪೈಕಿ ಖಾಲಿ ಇರುವ ಶೀಘ್ರಲಿಪಿಗಾರರ ಒಂದು ಹುದ್ದೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಕೇಂದ್ರ ಕಚೇರಿ ಬೆಂಗಳೂರು ಇಲ್ಲಿಗೆ ದಿನಾಂಕ:31.3.2007ರ ತನಕ ಸ್ಥಳಾಂತರಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1667

ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ.(ಸಣ್ಣ ನೀರಾವರಿ).

**FINANCE SECRETARIAT**

**Sub:** Cases in which assent of Finance Department may be presumed to have been given.

**Read:**
1. G.O. No. FD 01 TFP 96 dated: 10.7.1996.
2. G.O. No. FD 01 TFP 2003 Dated 12.6.2003.
3. Addendum No. FD 01 TFP 2001(P) Dated:7.7.2004.
4. G.O. No. FD 21 TFP 2006 Dated 2.9.2006.
5. Proceedings of the K.D.P. meeting held on 7.8.2006.

**Preamble:-**

In the Government Order dated 12.6.2003 read at (2) above the Powers given to the Secretaries to Govt. in item No. 39 of Government Order No. FD 01 TFP 96 dated:10.7.1996 regarding sanction of expenditure has been enhanced to Rs. 50.00 lakhs in each case subject to availability of budget provision

and further subject to maximum of Rs. 300.00 lakhs per month. Vide Addendum dated:7.7.2004 read at (3) above, it has been clarified that the powers given for sanction of expenditure is not applicable for loan and capital expenditure. This power has been enhanced again to Rs. 100.00 lakhs in each case subject to availability of budget provision and further subject to maximum of Rs. 500.00 lakhs per month in Government order dated 2.9.2006 read at (4) above..

In the K.D.P. meeting held on 7.8.2006 a request has been made to give powers to Soclal Welfare Department for sanction of proposals under capital head of account for construction of small Hostel buildings without sending them to Finance Department. The proposal has been considered by Govt and a decision has been taken to delegate powers to Secretaries to Govt. in respect of Capital Expenditure also and hence this order.

**Government order No FD 37 TFP 2006, Bangalore, Dated :8th November 2006**

Secretaries of Administrative Departments have powers to sanction capital expenditure up to Rs. 50.00 lakhs in each case only in respect of Construction of Hostel Buildings, school buildings and Hospital buildings and other buildings constructed departmentally for which specific provision has been made in the budget, powers given in Item No. 39 of Govt. Order No. G.O.No FD 01 TFP 96 dated:10.7.1996 stands modified to this extent.

By Order and in the name of the Governor of Karnataka,

**C. SHAMARAO**

P.R. 1669

Under Secretary to Government,(FR & BCC).

Finance Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಚಿವರ ಆಪ್ತ ಶಾಖೆಯಲ್ಲಿನ ಒಂದು ಗ್ರೂಫ್ 'ಸಿ' ಹುದ್ದೆಯನ್ನು ಗ್ರೂಫ್ 'ಎ' ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಚಿವರ ಟಿಪ್ಪಣಿ ಸಂಖ್ಯೆ: ಗ್ರಾಮೀಸನೈ/38/06-07, ದಿನಾಂಕ:27.6.2006.

**ಪ್ರಸ್ತಾವನೆ:**

ಮೇಲೆ ಓದಲಾದ ಟಿಪ್ಪಣಿಯಲ್ಲಿ ಮಾನ್ಯ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಚಿವರು ಶ್ರೀ ಎನ್.ಟಿ. ಮರುಳಸಿದ್ದಪ್ಪ, ನಿವೃತ್ತ ಜಂಟಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರನ್ನು 23.6.2006ರಿಂದ ಜಾರಿಗೆ ಬರುವಂತೆ ಅವರ ವಿಶೇಷ ಕರ್ತವ್ಯಾಧಿಕಾರಿಯಾಗಿ ನಿಯೋಜನೆ ಮೇಲೆ ನೇಮಿಸುವಂತೆ ಕೋರಲಾಗಿದೆ. ಈ ವಿಷಯವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 328 ಸಅಸೇ 2006, ಬೆಂಗಳೂರು, ದಿನಾಂಕ:21ನೇ ನವೆಂಬರ್ 2006**

ಮಾನ್ಯ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಚಿವರ ಆಪ್ತ ಶಾಖೆಯಲ್ಲಿ ಶ್ರೀ ಎನ್.ಟಿ. ಮರುಳಸಿದ್ದಪ್ಪ, ನಿವೃತ್ತ ಜಂಟಿ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಅವರನ್ನು ಸಚಿವರ ವಿಶೇಷ ಕರ್ತವ್ಯಾಧಿಕಾರಿಯಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಲು ದಿನಾಂಕ:23.6.2006 ರಿಂದ ಜಾರಿಗೆ ಬರುವಂತೆ ಹಾಗೂ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಚಿವರು ಆಪ್ತ ಶಾಖೆಗೆ ಮಂಜೂರಾದ ಒಂದು ಗ್ರೂಫ್ 'ಸಿ' ಹುದ್ದೆಯನ್ನು ಗ್ರೂಫ್ 'ಎ' ಹುದ್ದೆಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 1415 ವೆಚ್ಚ-5/2006, ದಿನಾಂಕ: 23.8.2006 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1671

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.(ಸೇವೆಗಳು-2)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಇಂಧನ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ:ಡಿಪಿಎಆರ್ 295 ಎಸ್ಎಎಸ್ 2005, ದಿ:3.10.06.

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಶ್ರೀ ದಿಲೀಪ್ ರಾವ್, ಐಎಎಸ್, ಇವರನ್ನು ಇಂಧನ ಇಲಾಖೆಯ ಉನ್ನತೀಕರಿಸಿದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡಿ ನೇಮಿಸಲಾಗಿದೆ. ಆದ್ದರಿಂದ ಇಂಧನ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಅಗತ್ಯತೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 92 ಸಸವಿ 2006 ಬೆಂಗಳೂರು, ದಿನಾಂಕ:22ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಇಂಧನ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಅಧಿಕಾರಿಯವರು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಅವರ ಕಾರ್ಯಾವಧಿಯವರೆಗೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸಲಾಗಿದೆ.

ಸದರಿ ಹುದ್ದೆಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 305 ಶಿಸಾಸೇ 2000, ದಿನಾಂಕ:8.6.2001 ರಲ್ಲಿ ನಿಗಧಿಪಡಿಸಿರುವಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1672

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.(ಸೇವೆಗಳು-2)

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸಿ. ತಾಯಪ್ಪ, ಹಿಂದಿನ ತಹಶೀಲ್ದಾರ್, ಮಾನ್ವಿ, ರಾಯಚೂರು ಜಿಲ್ಲೆ, ಪ್ರಸ್ತುತ ಮುನ್ಸಿಪಲ್ ತಹಶೀಲ್ದಾರ್, ಕೊಪ್ಪಳ ಜಿಲ್ಲೆ ಇವರಿಗೆ ವೈದ್ಯಕೀಯ ವೆಚ್ಚದ ಮೊತ್ತವನ್ನು ಹಿಂಭರಿಸುವ ಕುರಿತು.

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳ, ರಾಯಚೂರು ಜಿಲ್ಲೆ ಇವರ ಪತ್ರದ ದಿನಾಂಕ:25.3.2003, 21.10.2003.
2. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ನಿರ್ದೇಶನಾಲಯ. ಬೆಂಗಳೂರು ಇವರ ಪತ್ರದ ದಿನಾಂಕ:7.7.2006.

**ಪ್ರಸ್ತಾವನೆ:**

ಶ್ರೀ ಸಿ. ತಾಯಪ್ಪ, ತಹಶೀಲ್ದಾರ್, ಮಾನ್ವಿ, ರಾಯಚೂರು ಜಿಲ್ಲೆ ಇವರು ಕಾರ್ಯ ನಿರ್ವಹಿಸುತ್ತಿದ್ದ ತಾಲ್ಲೂಕು ಕೇಂದ್ರವಾದ ಮಾನ್ವಿಯಿಂದ ರಾಯಚೂರಿನ ಖಾಸಗಿ ವೈದ್ಯರಲ್ಲಿಗೆ ಹೋಗಿ ಇವರ ಹೃದಯ ನೋವಿಗಾಗಿ ಚಿಕಿತ್ಸೆ ನೀಡುವಂತೆ ಕೋರಲಾಗಿ, ಈ ಕಾಯಿಲೆಯು ಉಲ್ಬಣಗೊಂಡಿದ್ದು, ಈ ಚಿಕಿತ್ಸೆಗಾಗಿ ರಾಯಚೂರು ಖಾಸಗಿ ಅಥವಾ ಸರ್ಕಾರಿ ಆಸ್ಪತ್ರೆಯಲ್ಲಿ ಪರಿಕರಗಳು ಇಲ್ಲದೇ ಇರುವುದರಿಂದ, ಹೈದರಬಾದಿನಲ್ಲಿ ಈ ಕಾಯಿಲೆಗೆ ಚಿಕಿತ್ಸೆ ಪಡೆಯಲು ವೈದ್ಯರು ಸೂಚಿಸಿರುತ್ತಾರೆ.ಆದ್ದರಿಂದ, ಹೈದರಬಾದಿನ "ಕೇರ್ ಆಸ್ಪತ್ರೆ"ಯಲ್ಲಿ ಇವರು ತೆರೆದ ಹೃದಯದ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡಿರುತ್ತಾರೆ. ಈ ಸಂಬಂಧ ಒಟ್ಟು ರೂ. 1,15,441.00 (ಒಂದು ಲಕ್ಷದ ಹದಿನೈದು ಸಾವಿರದ ನಾಲ್ಕು ನೂರ ನಲವತ್ತೊಂದು ರೂ.ಗಳು ಮಾತ್ರ)ಗಳು ಖರ್ಚಾಗಿದ್ದು, ಮರುಪಾವತಿ ಮಾಡುವಂತೆ ಕೋರಿ ಪ್ರಸ್ತಾವನೆಯನ್ನು ನಿಗದಿತ ನಮೂನೆಯಲ್ಲಿ ಜಿಲ್ಲಾಧಿಕರಿಗಳು, ರಾಯಚೂರು ಜಿಲ್ಲೆ ಇವರ ಮುಖಾಂತರ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಸದರಿಯವರ ಡಿಸ್‌ಚಾರ್ಜ್ ಹಾಗೂ ಬಿಲ್ಲಿಂಗ್ ಡೀಟೈಲ್ಸ್‌ಗಳನ್ನು ಕಳುಹಿಸಿ ಸದರಿ ಅಧಿಕಾರಿಯವರು ಚಿಕಿತ್ಸೆಯನ್ನು ಕರ್ನಾಟಕ ರಾಜ್ಯ ಆಸ್ಪತ್ರೆಯಲ್ಲಿ ಪಡೆದಿದ್ದಲ್ಲಿ ಎಷ್ಟು ವೆಚ್ಚವಾಗುತ್ತದೆ ಎಂದು ಮೇಲೆ ಓದಲಾದ (2) ರಲ್ಲಿ ಕೇಳಲಾಗಿತ್ತು.

ಅದರಂತೆ, ನಿರ್ದೇಶಕರು, ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಶ್ರೀ ಸಿ. ತಾಯಪ್ಪ, ತಹಶೀಲ್ದಾರ್, ಮಾನ್ವಿ, ರಾಯಚೂರು ಜಿಲ್ಲೆ ದಿನಾಂಕ:10.7.2002 ರಿಂದ 13.7.2002ರ ಅವಧಿಯಲ್ಲಿ "ಕೇರ್" ಆಸ್ಪತ್ರೆ, ಹೈದರಬಾದ್‌ನಲ್ಲಿ ಪಡೆದ PTCA ಹೃದಯ ಚಿಕಿತ್ಸೆಗಾಗಿ ರೂ. 70,000/- ಹಾಗೂ ಬೆಡ್ ಚಾರ್ಜ್ ರೂ. 750/- ಒಟ್ಟು ರೂ. 70,750/- ಗಳನ್ನು ಮರುಪಾವತಿಸಲು ಅವಕಾಶವಿದೆಯೆಂದು ವರದಿ ಮಾಡಿರುವ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ.

**ಕರ್ನಾಟಕ ಸರ್ಕಾರಿ ಆದೇಶ ಸಂಖ್ಯೆ:ಆರ್.ಡಿ 66 ಎ.ಎಸ್.ಡಿ. 2004, ಬೆಂಗಳೂರು, ದಿನಾಂಕ:21ನೇ ನವೆಂಬರ್ 2006**

ಮೇಲೆ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಶ್ರೀ ಸಿ. ತಾಯಪ್ಪ, ತಹಶೀಲ್ದಾರ್, ಇವರ ಹೃದ್ರೋಗ ಚಿಕಿತ್ಸೆಗೆ ಸಂಬಂಧಿಸಿದಂತೆ, ಸಂದರ್ಭ ಮತ್ತು ಸನ್ನಿವೇಶವನ್ನು ಗಣನೆಗೆ ತೆಗೆದುಕೊಂಡು, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಸದರಿ ಚಿಕಿತ್ಸೆಯನ್ನು ರಾಜ್ಯದ ಸರ್ಕಾರಿ ಆಸ್ಪತ್ರೆಗಳಲ್ಲಿ ಪಡೆದಿದ್ದಲ್ಲಿ ತಗಲಬಹುದಾದ ವೆಚ್ಚಕ್ಕೆ ಸೀಮಿತಗೊಳಿಸಿ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಶೀಫಾರಸ್ಸು ಮಾಡಿರುವ ಮೊಬಲಗು ರೂ. 70,750/-(ಎಪ್ಪತ್ತು ಸಾವಿರಾದ ಏಳುನೂರು ಐವತ್ತು ರೂ.ಗಳು ಮಾತ್ರ)ಗಳನ್ನು ಸರ್ಕಾರವು ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು, 1963 ನಿಯಮ 31 ರಿಂದ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 14 ಸಡಿಲಿಸಿ ಇವರಿಗೆ ವೈದ್ಯಕೀಯ ವೆಚ್ಚವನ್ನು ಮರುಪಾವತಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

ಮೇಲ್ಕಂಡ ಆದೇಶವನ್ನು ಸಿಆಸುಇ (ಸೇವಾ ನಿಯಮಗಳು-2) ಇವರ ಟಿಪ್ಪಣಿ ಸಂಖ್ಯೆ:ಸಿಆಸುಇ 733, ಸೇನಿಎಫ್ 2006, ದಿನಾಂಕ:11.8.2006 ಮತ್ತು ಆರ್ಥಿಕ ಇಲಾಖೆ, (ವೆಚ್ಚ-7) ಇವರ ಟಿಪ್ಪಣಿ ಸಂಖ್ಯೆ:ಆಇ 808 ವೆಚ್ಚ 7/2004, ದಿನಾಂಕ:28.9.2006ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 1673

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ.(ಸೇವೆಗಳು-3)